**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 41
ಸದಸ್ಯರ ಹೆಸರು : ಶ್ರೀ ನಿರಾಣಿ ಹಣಮಂತ್ ರುದ್ರಪ್ಪ
ಉತ್ತರಿಸುವ ದಿನಾಂಕ : 15/07/2019
ಉತ್ತರಿಸುವ ಸಚಿವರು : ಸಮಾಜ ಕಲ್ಯಾಣ ಸಚಿವರು

| ಕ್ರಸ | ವಿಷಯ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ (ಕ್ರೈಸ್) ವತಿಯಿಂದ ನಡೆಯುತ್ತಿರುವ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಮಸ್ಯೆಗಳು ಸರ್ಕಾರದ ಗಮನಕ್ಕೆ ಬಂದಿವೆಯೇ; | ಹೌದು. |
| ಆ) | ಶ್ರೀ ಕುಮಾರನಾಯಕ್ ವರದಿಯಂತೆ ಸದರಿ ನೌಕರರುಗಳಿಗೆ ಸೌಲಭ್ಯಗಳನ್ನು ಕಲ್ಪಿಸುವಲ್ಲಿ ಸರ್ಕಾರ ವಿಳಂಬ ನೀತಿ ಅನುಸರಿಸುತ್ತಿರುವುದಕ್ಕೆ ಕಾರಣಗಳೇನು: | ಶ್ರೀ ಕುಮಾರನಾಯಕ್ ವರದಿಯಂತೆ ಹೆಚ್ಚುವರಿ ವೇತನ ಬಡ್ತಿ ಮಂಜೂರಾತಿ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |
| ಇ) | ಕ್ರೈಸ್ ಅಧೀನದಲ್ಲಿ ನಡೆಯುತ್ತಿದ್ದ ಅಲ್ಪ ಸಂಖ್ಯಾತರ ವಸತಿ ಶಾಲೆಗಳನ್ನು ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿದಂತೆ ಪರಿಶಿಷ್ಟ ಪಂಗಡಗಳ ಮೊರಾರ್ಜಿ ದೇಸಾಯಿ/ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ ನೌಕರರುಗಳಿಗೆ ಸೌಲಭ್ಯಗಳನ್ನು ಒದಗಿಸಲು ಸರ್ಕಾರ ವಿಳಂಬ ಮಾಡುತ್ತಿರುವುದಕ್ಕೆ ಕಾರಣಗಳೇನು? | ಸಂಘದ ವಸತಿ ಶಾಲೆಗಳನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸುವ ಪ್ರಸ್ತಾವನೆ ಇರುವುದಿಲ್ಲ.<br><br>ಸಂಘದ ವ್ಯಾಪ್ತಿಯಡಿ ಬರುವ ವಸತಿ ಶಾಲೆಗಳ ನೌಕರರಿಗೆ ಸರ್ಕಾರದ ನೌಕರರುಗಳಿಗೆ ನೀಡಲಾಗುತ್ತಿರುವ ಮಾದರಿಯಲ್ಲಿಯೇ ವೇತನ, ವೇತನ ಬಡ್ತಿ, ತುಟ್ಟಿ ಭತ್ಯೆ, ಹೆರಿಗೆ ರಜೆ, ಪಿತೃತ್ವ ರಜೆ, ಪ್ರಯಾಣ ಭತ್ಯೆ, ಅನುಕಂಪ ಆಧಾರದ ಮೇಲೆ ನೇಮಕಾತಿ, ವೈದ್ಯಕೀಯ ವೆಚ್ಚ ಮರುಪಾವತಿ, ಗಳಿಕೆ ರಜೆ ನಗದೀಕರಣ ಸೌಲಭ್ಯ ನೀಡಲಾಗುತ್ತಿದೆ.<br><br>ಸರ್ಕಾರಿ ವಿಮಾ ಯೋಜನೆ, ಸಮೂಹ ವಿಮಾ ಯೋಜನೆಗಳ ಸೌಲಭ್ಯ ಒದಗಿಸುವ ಬಗ್ಗೆ ಪ್ರಸ್ತಾವನೆಯು ಪರಿಶೀಲನೆಯಲ್ಲಿದೆ. |
| ಈ) | ಸದರಿ ಶಾಲೆಗಳನ್ನು ಸಮಾಜ ಕಲ್ಯಾಣ ಇಲಾಖೆಯಲ್ಲಿ ವಿಲೀನಗೊಳಿಸಿ, ಇತರೆ ಇಲಾಖೆಯ ಸರ್ಕಾರಿ ನೌಕರರಿಗೆ ಮತ್ತು ಶಿಕ್ಷಕರುಗಳಿಗೆ ಇರುವ ಸೌಲಭ್ಯಗಳಂತೆ ಸದರಿ ನೌಕರರುಗಳಿಗೆ ಸೌಲಭ್ಯವನ್ನು ಕಲ್ಪಿಸುವ ಸರ್ಕಾರ ಮುಂದಾಗುವುದೇ; ಹಾಗೂ ಯಾವ ಕಾಲಮಿತಿಯಲ್ಲಿ ಸದರಿ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು? | |

ಸಕಇ 82 ಮೊದೇಶಾ 2019

(ಪ್ರಿಯಾಂಕ್ ಖರ್ಗೆ)
ಸಮಾಜ ಕಲ್ಯಾಣ ಸಚಿವರು